# ಪಂಚಮ

ಸಂಪುಟ: 3 ಸಂಚಿಕೆ: 16-17 5, ಅಕ್ಟೋಬರ್ 1979 ಪಾಕ್ಷಿಕ ಬೆಲೆ: 20 ಪೈಸೆ

ಎಲ್ಲ ಬಗೆಯ ಆರ್ಥಿಕ, ಧಾರ್ಮಿಕ ಸಾಮಾಜಿಕ, ಬೌದ್ಧಿಕ ದಬ್ಬಾಳಿಕೆಯ ವಿರುದ್ಧ ದಲಿತರಲ್ಲಿ ಪ್ರಜ್ಞೆ ಮೂಡಿಸಲು ಯತ್ನಿಸುತ್ತಿರುವ ಪಂಚಮಕ್ಕೆ ಚಂದಾದಾರರಾಗಿರಿ.

ವಾರ್ಷಿಕ ಚಂದಾ 5 ರೂ. ಗಳು.

ಲೇಖನ—ಸುದ್ಧಿ ಕಳುಹಿಸುವ ಮೂಲಕ ನೋವುಳ್ಳವರ ನುಡಿಯಾಗಿರುವ ಪಂಚಮವನ್ನು ನಿಮ್ಮ ದನಿಯನ್ನಾಗಿಸಿಕೊಳ್ಳಿ.

## ದಲಿತ ಶಿಕ್ಷಕರ ಬಗೆಗೆ ಮೈಸೂರು ವಿ.ವಿ. ವಂಚನೆ ನೀತಿ

[ಪಂಚಮ ಪ್ರತಿನಿಧಿಯಿಂದ]

ಮೈಸೂರು ವಿಶ್ವವಿದ್ಯಾನಿಲಯ ಕಳೆದ ತಿಂಗಳು ಅನೇಕ ಶಿಕ್ಷಕರ ಹುದ್ದೆಗಳಿಗೆ ಜಾಹೀರುಗೊಳಿಸಿತು. ಆದರೆ ಈ ಕಾಯಂ ಹುದ್ದೆಗಳ ಅರ್ಜಿ ಕರೆಯುಹಾಲಿ ದಲಿತ ವರ್ಗದ ಅಧ್ಯಾಪಕರನ್ನು ಸಾಕಷ್ಟು ಗಾಬರಿಗೊಳಿಸಿದೆ. ತಮ್ಮ ಕೆಲಸವಾಯಿತು ತಾವಾಯಿತೆಂದುಕೊಂಡು ಇದ್ದ ದಲಿತ ಶಿಕ್ಷಕರು ಇದರಿಂದಾಗಿ ಈಗ ಎಚ್ಚರಗೊಂಡು ಸಂಘಟನೆ-ಹೋರಾಟ ಇತ್ಯಾದಿ ಚಿಂತಿಸತೊಡಗಿದ್ದಾರೆ.

ಹಿಂದಿನಿಂದಲೂ ಮೈಸೂರು ವಿ. ವಿ. ಜಾತೀಯತೆಗೆ ಹೆಸರು. ಇಲ್ಲಿನ ಪ್ರತಿಯೊಂದು ವಿಭಾಗಗಳೂ ಒಂದೊಂದು ಜಾತಿಯ ಮುಖ್ಯವಾಗಿ ಪ್ರಬಲಕೋಮುಗಳ ಗುತ್ತೇದಾರಿಯಲ್ಲಿವೆ. ಹಾಗಾಗಿ ಅರ್ಥಶಾಸ್ತ್ರ, ರಾಜಕೀಯ ವಿಭಾಗಗಳು ಲಿಂಗಾಯಿತರವು. ತತ್ವಶಾಸ್ತ್ರ, ಪುರಾತತ್ವ, ಹಿಂದಿ, ಸಂಸ್ಕೃತ, ಶಿಕ್ಷಣ, ಜರ್ನಲಿಸಂ-ಜನಿವಾರ ವಿಭಾಗಗಳೆಂತಲೂ, ಮಾನವ ಶಾಸ್ತ್ರ, ಕನ್ನಡ ಮುಂತಾದವುಗಳು ಒಕ್ಕಲಿಗರ ವಿಭಾಗಗಳೆಂತಲೂ ಕರೆಯಲ್ಪಡುತ್ತಿವೆ. ಅಷ್ಟು ಸ್ಪಷ್ಟವಾಗಿ ಜಾತಿ ಇಲ್ಲಿ ಬೇರೂರಿದೆ.

ಕಾನೂನಿನ ಬಲವಂತಕ್ಕೆ ಮತ್ತು ವಿಶ್ವವಿದ್ಯಾನಿಲಯಕ್ಕೆ ಇರುವ ಆರೋಪಗಳಿಂದ ಮುಕ್ತವಾಗಲು ಇತ್ತೀಚೆಗೆ ಬೆರಳೆಣಿಕೆಯಷ್ಟು ದಲಿತ ಅಧ್ಯಾಪರಕನ್ನು ಹಂಗಾಮಿಯಾಗಿ ನೇಮಿಸಿಕೊಳ್ಳಲಾಗಿದೆ. ಆದರೆ ಇವರಿಗೆ ಈಗ ನಿಜವಾದ ಪೀಕಲಾಟ ಉಂಟಾಗಿದೆ.

ವಿಶ್ವವಿದ್ಯಾನಿಲಯದ ಕಾಲೇಜುಗಳಲ್ಲಿ ಸುಮಾರು 600 ಮಂದಿ ಅಧ್ಯಾಪಕರುಗಳಿದ್ದಾರೆ. ಇವರಲ್ಲಿ ಶೇ. 18 ಹೋಗಲಿ 18 ಮಂದಿ ಕೂಡ ಕಾಯಂ ಆಗದ ದಲಿತ ಅಧ್ಯಾಪಕರುಗಳಿಲ್ಲ !

ಈಗ ಹಾಲಿ ಇರುವ 49 ಸ್ನಾತಕೋತ್ತರ ಇಲಾಖೆಗಳಲ್ಲಿ ಐದರಲ್ಲಿ ಮಾತ್ರ ಕೆಲವು ದಲಿತ ಅಧ್ಯಾಪಕರು ಸಿಗುತ್ತಾರೆ. ವಿಶ್ವವಿದ್ಯಾನಿಲಯವು

[2ನೇ ಪುಟ ನೋಡಿ]

## ‘ಅಸ್ಪೃಶ್ಯತೆ’ ಆಚರಿಸಿದ ಬೇತಮಂಗಲ ಶಾಸಕನ ವಿರುದ್ಧ ಪ್ರತಿಭಟನೆ

[ಪಂಚಮ ಪ್ರತಿನಿಧಿಯಿಂದ]



ಸದಾ ದಲಿತರನ್ನು ಒಳ ಪಂಗಡಗಳಾಗಿ ವಿಭಜಿಸಿ ಆ ಮೂಲಕ ರಾಜಕೀಯ ಪ್ರಾತಿನಿಧ್ಯ, ಮುಂತಾದ ಲಾಭಗಳನ್ನು ಪಡೆಯುತ್ತಿರುವ ರಾಜಕಾರಣಿಗಳು ತಮ್ಮ ನೀತಿಗೆಟ್ಟ ಕ ಸು ಬ ನ್ನು ಮುಂದುವರಿಸಿಕೊಂಡೇ ಬರುತ್ತಿದ್ದಾರೆ. ಇದು ನಾಡಿನಾದ್ಯಂತ ಮುಸುಕು ಮರೆಯಲ್ಲಿ ನಡೆಯುತ್ತಿದ್ದರೆ ಕೋಲಾರ ಜಿಲ್ಲೆಯಲ್ಲಿ ಬಹಿರಂಗವಾಗಿ ಸಾಗುತ್ತಿದೆ. “ಜಿಲ್ಲೆಯ ಇಂದಿರಾ ಕಾಂಗ್ರೆಸ್‌ನ ಒಡೆತನ ಪೂರ್ತಿ ಸ್ಪೃಶ್ಯ ಹರಿಜನರ ಕೈಯಲ್ಲಿದೆ” ಎಂದು ಅಸ್ಪೃಶ್ಯ ರಾಜಕಾರಣಿಗಳು ಬೊಬ್ಬೆ ಹಾಕಿದರೆ ಸವಲತ್ತು ಮೀಸಲಾತಿ ಕೇವಲ ಅಸ್ಪೃಶ್ಯ ಹರಿಜನರು ಕಬಳಿಸುತ್ತಿದ್ದಾರೆ ಎಂದು ಸ್ಪೃಶ್ಯ ಹರಿಜನ ರಾಜಕಾರಣಿಗಳು

[2ನೇ ಪುಟ ನೋಡಿ]

## ಶಾಸಕನ ವಿರುದ್ಧ ಪ್ರತಿಭಟನೆ

[ಮೊದಲನೇ ಪುಟದಿಂದ]

**ಕೂಗೆಬ್ಬಿಸುತ್ತಿದ್ದಾರೆ. ಇವೆರಡೂ ಗುಂಪುಗಳಿಗೆ ದಲಿತರ ಒಟ್ಟಾರೆ ವಿಮೋಚನೆ ಕುರಿತಾಗಿ ಎಳ್ಳಷ್ಟೂ ಕಾಳಜಿ ಇಲ್ಲ. ಈ ಕೂಗು ಗದ್ದಲ ಕೇವಲ ಅವರ ಸ್ವಂತ ಪ್ರಯೋಜನಗಳಿಗಾಗಿಯೇ ಹುಟ್ಟಿಸಲಾಗುತ್ತಿದೆ.**

ವಸ್ತುಸ್ಥಿತಿ ಹೀಗಿರುವಾಗ ಬೇತಮಂಗಲ ಕ್ಷೇತ್ರದ ಇಂದಿರಾ ಕಾಂಗ್ರೆಸ್ ಶಾಸಕ ಸಿ. ವೆಂಕಟೇಶಪ್ಪ 11-9-79 ರಂದು ಬಂಗಾರು ಪೇಟೆ ಸಹಾಯಕ ವಿದ್ಯಾಧಿಕಾರಿಗಳನ್ನು "ಏನೋ ಹೊಲೆರ್ಗೇಕೊಬ್ಬು ಹೆಚ್ಚಾಯಿತಾ?" ಇತ್ಯಾದಿಯಾಗಿ ಜಾತಿಯ ಹೆಸರಿನಿಂದ ಅವಮಾನಿಸಿ ಅಸ್ಪೃಶ್ಯತೆ ಆಚರಿಸಿದ್ದರು. ಇದನ್ನು ವಿರೋಧಿಸಿದ ದಲಿತರು ಒಂದುಗೂಡಿ ಕರ್ನಾಟಕ ದಲಿತ ಸಂಘರ್ಷ ಸಮಿತಿ ಬಂಗಾರು ಪೇಟೆ ತಾ. ಶಾಖೆಯ ಆಶ್ರಯದಲ್ಲಿ 14-9-79 ರಂದು ಪ್ರತಿಭಟನಾ ಮೆರವಣಿಗೆ ನಡೆಸಿದರು.

ಅಂಬೇಡ್ಕರ್ ಸ್ಮಾರಕ ಪ್ರತಿಮೆ ಸ್ಥಳದಿಂದ ಹೊರಟ ಸುಮಾರು 700 ಜನರ ಮೆರವಣಿಗೆ ಶಾಸಕರ ಪ್ರತಿಕೃತಿಯೊಂದಿಗೆ ಪಟ್ಟಣದ ಪ್ರಮುಖ ಬೀದಿಗಳಲ್ಲಿ ಅಸ್ಪೃಶ್ಯತೆ, ಜಾತೀಯತೆ ಸರ್ಕಾರದ ನಿರ್ಲಕ್ಷ್ಯ, ಅಕ್ರಮ ಭೂ ಹಂಚಿಕೆ, ರಾಜಕಾರಣಿಗಳ ವಿಭಜನಾ ನೀತಿಯ ವಿರುದ್ಧ ಘೋಷಣೆಗಳನ್ನು ಕೂಗುತ್ತಾ ಜ್ಯೂಬಿಲಿ ವೃತ್ತದ ಬಳಿ ಪ್ರತಿಕೃತಿಯನ್ನು ಸುಟ್ಟರು.

ಬೇತಮಂಗಲ ಮೀಸಲು ಕ್ಷೇತ್ರದಿಂದ ಚುನಾಯಿತರಾಗಿರುವ ವೆಂಕಟೇಶಪ್ಪನ ಊರಾದ ಬುವನಹಳ್ಳಿಯಲ್ಲಿ ಸರ್ಕಾರ ಬೋರ್‌ವೆಲ್ಲೊಂದನ್ನು ಹಾಕಿಸಿದೆ. ಆದರೆ ಅಲ್ಲಿ ಹೊಲೆ ಮಾದಿಗರಿಗೆ ನೀರು ಸಹ ಮುಟ್ಟಿಸುವುದಿಲ್ಲ. ಇತ್ತೀಚೆಗೆ ಬೂದಿಕೋಟೆ ಬಳಿ ನಿರ್ಮಾಣಗೊಳ್ಳುತ್ತಿರುವ ಒಡ್ಡು ಕೆಳಗೆ ಬಡವರಿಗೆ ಹಂಚಲಾದ ಭೂಮಿಯನ್ನು ಕಬಳಿಸಿದ 'ಭೂಮಾಲೀಕರ ಜಾಲ'ದಲ್ಲಿ ಈ ಶಾಸಕರೂ ಒಬ್ಬರಾಗಿದ್ದಾರೆ. ಇನ್ನೂ ಹತ್ತಾರು ಕೃತ್ಯಗಳಿಂದ ತಾವು ಕೇವಲ ಶ್ರೀಮಂತ ಭೂಮಾಲೀಕರ 'ಭಂಟ' ಎಂಬುದನ್ನು ಅವರು ತೋರಿಸಿ ಕೊಟ್ಟಿದ್ದಾರೆ.

## ಮೈಸೂರು ವಿ.ವಿ. ನೀತಿ...

[ಮೊದಲನೇ ಪುಟದಿಂದ]

ಆಗಸ್ಟ್ 25 ರಂದು ಪತ್ರಿಕೆಗಳಲ್ಲಿ ಪ್ರಕಟಿಸಿದ ಜಾಹೀರಾತು ಈಗ ಇವರೆಲ್ಲರ ಭವಿಷ್ಯವನ್ನು ಅತಂತ್ರಗೊಳಿಸಿದೆ. ಉದ್ದೇಶಿತ ಸಂಚಿನಿಂದ ಕೂಡಿದೆ ಎನ್ನಲಾದ ಈ ಜಾಹೀರಾತು ಇವರೆಲ್ಲರಿಗೂ ಒಂದು ರೀತಿಯ ಷಾಕ್ ಉಂಟು ಮಾಡಿದೆ. ಜಾಹೀರಾತಿನ ಪ್ರಕಾರ ಇನ್ನಷ್ಟು ಹೊಸಬರಿಗೆ ಉದ್ಯೋಗ ಸಿಗುವ ಬದಲು, ಈಗ ಸ್ಥಳೀಯ ಅಭ್ಯರ್ಥಿಗಳಾಗಿ ಕೆಲಸಮಾಡುತ್ತಿರುವ ಬಹುತೇಕರು ಕೆಲಸ ಕಳೆದುಕೊಳ್ಳಲಿದ್ದಾರೆ. ಭವಿಷ್ಯದಲ್ಲಿ ಕಾಣುವ ಈ ಭಯದ ಛಾಯೆ ಎಲ್ಲಾ ದಲಿತ ಅಧ್ಯಾಪಕರನ್ನು ಆವರಿಸಿದೆ.

ಜಾಹೀರಾತಿನ ಪ್ರಕಾರ 113 ಹುದ್ದೆಗಳಲ್ಲಿ 21 ಹುದ್ದೆಗಳನ್ನು ಹರಿಜನ-ಗಿರಿಜನರಿಗೆ ಕಾದಿರಿಸಲಾಗಿದೆ. ಅಲ್ಲದೆ ಈ ಮೀಸಲಾತಿ ಒಂದು ಸಂಚಿನಿಂದ ಕೂಡಿದೆ ಎಂಬುದಕ್ಕೆ ಇಲ್ಲಿ ನೋಡಿ. ಇಂಗ್ಲೀಷ್ ವಿಭಾಗದಲ್ಲಿ ಹುಡುಕಿದರೂ ಈವರೆಗೆ ಯಾವ ದಲಿತ ಅಧ್ಯಾಪಕನೂ ಇಲ್ಲ ಮೊದಲು ಅಧ್ಯಾಪಕ ಹುದ್ದೆ ಮೀಸಲು ಕೊಡದ ವಿ. ವಿ. ದಿಢೀರನೆ ರೀಡರ್ ಹುದ್ದೆಯನ್ನು ಕಾದಿರಿಸಿದೆ. ದಲಿತ ಅಭ್ಯರ್ಥಿಗಳನ್ನು ಇಂತಹ ಕುತಂತ್ರದಿಂದ ದೂರ ಇಡುವ ಯತ್ನ ಬಹುತೇಕ ಇಲಾಖೆಗಳಲ್ಲಿ ನಡೆದಿದೆ.

ಹೀಗಾಗಿ ದಲಿತ ಅಭ್ಯರ್ಥಿಗಳು ಸಿಗುವ ಕಡೆ ಮೀಸಲು ಇಡದೆ, ಅಭ್ಯರ್ಥಿಗಳೇ ದೊರೆಯದ ಕಡೆ ಮೀಸಲು, ರೀಡರ್ ಮುಂತಾದ ಹುದ್ದೆಗಳಿಗೆ ಅರ್ಜಿ ಕರೆಯುವ ಮೂಲಕ ಮೋಸಗೊಳಿಸುವ ಉದ್ದೇಶಿತ ಯತ್ನಗಳು ನಡೆದಿವೆ. ಕೆಲವು ಕಡೆ ಈಗ ಸ್ಥಳೀಯ ಅಭ್ಯರ್ಥಿಗಳಿಗಾಗಿ ದಲಿತರು ಕೆಲಸಮಾಡುವ ಜಾಗಗಳಿಗೆ ಕಾಯಂ ಹುದ್ದೆಗಳಿಗೆ ದಲಿತೇತರರಿಗೆ ಕಾದಿರಿಸುವ ಯತ್ನದಿಂದಲೂ ಅವರನ್ನು ದೂರ ಇಡಲಾಗುತ್ತಿದೆ. ಇದರಿಂದಾಗಿ ವಿಶ್ವವಿದ್ಯಾನಿಲಯ ದಲಿತರ ಬಗ್ಗೆ ಅಸ್ಪೃಶ್ಯತೆ ಆಚರಿಸಲು ಹೊರಟಂತಿದೆ.

ಮೈಸೂರು ವಿಶ್ವವಿದ್ಯಾನಿಲಯ ದಲಿತರ ಬಗ್ಗೆ ಹೊಂದಿರುವ ಇಂಥ ಅಸ್ಪೃಶ್ಯತಾ ಧೋರಣೆ ವಿರುದ್ಧ ಪ್ರತಿಭಟಿಸಿ ಸುವಿಧಾನಬದ್ಧ ನ್ಯಾಯಾಕ್ಕಾಗಿ ದಲಿತ ಅಧ್ಯಾಪಕರು ಈಗ ಸಜ್ಜಾಗುತ್ತಿದ್ದಾರೆ.

## ದಲಿತ ನುಡಿ

ಮಹಾತ್ಮಗಾಂಧಿ ಒಬ್ಬ ಜನತಾಶತ್ರು; ದೇಶದ ಖಳನಾಯಕ. ಗಾಂಧಿವಾದ ಎಂದರೆ ಧಾರ್ಮಿಕ ಅಧಿಕಾರಿಗಳ ರಕ್ಷಣೆ, ಗಾಂಧಿವಾದ ಎಂದರೆ ಜಾತಿವಾದ, ಗಾಂಧಿವಾದ ಎಂದರೆ ಸಂಪ್ರದಾಯವಾದ, ಗಾಂಧಿವಾದ ಎಂದರೆ ಸಾಂಪ್ರದಾಯಿಕ ಶ್ರಮವಿಭಜನೆಯ ರಕ್ಷಣೆ. ಗಾಂಧಿವಾದ ಎಂದರೆ ಅವತಾರವಾದ. ಗಾಂಧಿವಾದ ಎಂದರೆ ಪವಿತ್ರ ಗೋಮಾತೆ, ಗಾಂಧಿವಾದ ಎಂದರೆ ಮೂರ್ತಿಪೂಜೆ, ಗಾಂಧಿವಾದ ಎಂದರೆ ಅವೈಜ್ಞಾನಿಕ ದೃಷ್ಟಿಕೋನ.

—ಅಂಬೇಡ್ಕರ್

---

## ದಲಿತ ನೌಕರನ ಮೇಲೆ ಹಲ್ಲೆ

ಮೈಸೂರಿನ ಕೇಂದ್ರ ಆಹಾರ ತಾಂತ್ರಿಕ ಸಂಶೋಧನಾ ಕೇಂದ್ರದಲ್ಲಿ ಇತ್ತೀಚೆಗೆ ದಲಿತ ನೌಕರರೊಬ್ಬರಿಗೆ ಅಧಿಕಾರಿಯೊಬ್ಬನು ಸಾರ್ವಜನಿಕವಾಗಿ ಕಪಾಳಕ್ಕೆ ಹೊಡೆದ ಘಟನೆ ವರದಿಯಾಗಿದೆ.

ಆಗಸ್ಟ್ 22 ರಂದು ಬೆಳಿಗ್ಗೆ ಎಂಜಿನಿಯರಿಂಗ್ ವಿಭಾಗದ ಉಪಕರಣದ ಒಂದು ಸಣ್ಣ ಹಿತಾಳೆಯ ಬಿಡಿ ಭಾಗವೊಂದು ಕಣ್ಮರೆಯಾಯಿತು. ವೆಂಕಟೇಶ್ವರನ್ ಎಂಬ ಅಧಿಕಾರಿಯು ಅಂದು ಮಧ್ಯಾಹ್ನ ನೌಕರರ ವಿಚಾರಣೆ ನಡೆಸಲು ಆರಂಭಿಸಿದ.

ಅನೇಕ ನೌಕರರ ವಿಚಾರಣೆ ನಡೆಸುತ್ತಿದ್ದಂತೆ ದಲಿತ ನೌಕರ ಗುರುಸಿದ್ದಯ್ಯ ಎಂಬುವವರ ಸರದಿ ಬಂತು. ಈತನೇ ಕಳವುಮಾಡಿರಬಹುದೆಂಬ ಪೂರ್ವಾಗ್ರಹ ಪೀಡಿತನಾಗಿದ್ದ ವೆಂಕಟೇಶ್ವರನ್ ಗುರುಸಿದ್ದಯ್ಯನವರನ್ನು ತುಚ್ಛವಾಗಿ ಬೈದು ಬೆದರಿಸಿ ಕಪಾಳಕ್ಕೆ ಹೊಡೆದ. ಬಲವಾದ ಹೊಡೆತದಿಂದ ಗುರುಸಿದ್ದಯ್ಯ ಕುಸಿದು ಬಿದ್ದರು. ದಲಿತ ನೌಕರರೊಬ್ಬರ ಮೇಲೆ ಅಧಿಕಾರಿಯೊಬ್ಬನು ನಡೆಸಿದ ಈ ಹಲ್ಲೆಯನ್ನು ತಡೆಯಲು ಯಾರೂ ಮುಂದಾಗಲಿಲ್ಲ. ನಂತರ ಆತನ ಸಹ ನೌಕರರು ಗುರುಸಿದ್ದಯ್ಯನವರನ್ನು ಆಸ್ಪತ್ರೆಗೆ ಸೇರಿಸಿದರು.

ಸಹೋದ್ಯೋಗಿಯೊಬ್ಬರ ಮೇಲೆ ಅಧಿಕಾರಿಯ ಅಟ್ಟಹಾಸದಿಂದ ಕುಪಿತಗೊಂಡ ನೌಕರರು ಸಂಘಟಿತರಾಗಿ C. F. T. R. I. ಗೆ ನೀರು ಸರಬರಾಜು ನಿಲ್ಲಿಸಿದರು. ಒಂದಾದ ನೌಕರರಿಗೆ ಈಗ ವೆಂಕಟೇಶ್ವರನ್ ಬೇಷರತ್ ಕ್ಷಮೆ ಯಾಚಿಸಿದ.

# ಅರ್ಜುನಗಿಯಲ್ಲಿ ದಲಿತರಿಗೆ ಸಾಮಾಜಿಕ ಬಹಿಷ್ಕಾರ

[ಪಂಚಮ ಪ್ರತಿನಿಧಿಯಿಂದ]

ಗುಲಬರ್ಗಾ ಜಿಲ್ಲೆ ಅಫಜಲ್ಪುರ ತಾಲ್ಲೂಕಿನಲ್ಲಿ ಒಂದು ಹಳ್ಳಿ ಅರ್ಜುನಗಿ. ಮುಖ್ಯ ರಸ್ತೆಯಿಂದ ತುಸು ಒಳಭಾಗದಲ್ಲಿರುವ ಈ ಹಳ್ಳಿಗೆ ಹತ್ತಿರದ ಪೋಲೀಸ್ ಠಾಣೆಯೆಂದರೆ ಸುಮಾರು 3 ಕಿ.ಮೀ. ದೂರದಲ್ಲಿರುವ ರೇವೂರ್ ಠಾಣೆ. ಅರ್ಜುನಗಿಯಲ್ಲಿ ಸುಮಾರು 200 ಮನೆಗಳಿದ್ದು ಇಲ್ಲಿ ದಲಿತರವು ಅಂದಾಜು 30-40 ಇರಲಿಕ್ಕೆ ಸಾಕು. ಜನಸಂಖ್ಯಾವಾರಾಗಿ ನೋಡುವುದಾದರೆ ಲಿಂಗಾಯಿತರೇ ಹೆಚ್ಚು ಜನರು. ಎಲ್ಲಾ ಹಳ್ಳಿಗಳಲ್ಲಿ ಇರುವಂತೆ ಇಲ್ಲಿಯೂ ಕೂಡ ಜಾತಿಪದ್ಧತಿಯ ಹೇಯರೂಪವಾದ ಅಸ್ಪೃಶ್ಯತೆ ಇದ್ದೇ ಇದೆ. ಬಹಿರಂಗವಾಗಿ ಸಾರ್ವಜನಿಕ ಬಾವಿ, ಹೋಟೆಲ್, ದೇವಸ್ಥಾನಗಳಲ್ಲಿ ಇದು ಕಂಡು ಬರುತ್ತದೆ. 6-7 ಚಿಕ್ಕ ರೈತರನ್ನು ಬಿಟ್ಟರೆ ಉಳಿದೆಲ್ಲ ದಲಿತರೂ ಕೃಷಿ ಕೂಲಿಕಾರರೇ ಆಗಿದ್ದಾರೆ. ತುಸುಮಟ್ಟಿಗೆ ದಲಿತರು ಒಗ್ಗಟ್ಟಿನಿಂದ ಇದ್ದರೂ ಕೂಡ ಆರ್ಥಿಕ ಪರಾವಲಂಬನೆಯಿಂದ ತಮ್ಮ ಮೇಲಾಗುವ ಅನ್ಯಾಯ-ದೌರ್ಜನ್ಯಗಳನ್ನು ಪ್ರತಿಭಟಿಸಲು ಶಕ್ತರಾಗಿಲ್ಲ.

ಅರ್ಜುನಗಿಯಲ್ಲಿ ಕಳೆದ ತಿಂಗಳಿಂದ ದಲಿತರಿಗೆ ಸಾಮಾಜಿಕ ಬಹಿಷ್ಕಾರ ಹಾಕಲಾಗಿದೆ. ಹಣ ಕೊಟ್ಟರೂ ಜೋಳವನ್ನು ಬೀಸಿ ಕೊಡುತ್ತಿಲ್ಲ. ದಿನಸಿ ಅಂಗಡಿಗಳಲ್ಲಿ ಬೆಂಕಿಪೆಟ್ಟಿಗೆ, ಚಿಮಣಿ ಎಣ್ಣೆ ಇತ್ಯಾದಿಗಳು ಸಿಗುತ್ತಿಲ್ಲ. ದಲಿತರನ್ನು ಕೃಷಿ ಕೂಲಿಗೂ ಕೂಡ ಕರೆಯಲಾಗುತ್ತಿಲ್ಲ. ಸಾಮಾಜಿಕ ಭೇದಭಾವವನ್ನು ಅನುಭವಿಸುತ್ತಿರುವ ದಲಿತರು ತಮ್ಮ ಜೀವನವನ್ನೇ ಹಳಿದುಕೊಳ್ಳುತ್ತಿದ್ದಾರೆ ಮತ್ತು ಕೆಲವರು ಊರನ್ನೇ ಬಿಟ್ಟು ಹೋಗುವ ಯೋಚನೆಯನ್ನೂ ಮಾಡುತ್ತಿದ್ದಾರೆ.

1979ರ ಜನವರಿ 26ನೇ ದಿನದಿಂದ ದಲಿತರ ಮೇಲೆ ಸವರ್ಣೀಯರ ಕಾಕದೃಷ್ಟಿ ಆರಂಭವಾಯಿತು. ಅಂದು ಕೆಲ ದಲಿತ ವಿದ್ಯಾರ್ಥಿಗಳು ಊರಿನ ತಮ್ಮ ಶಾಲೆಯಲ್ಲಿ ಹಾಗೂ ಪಂಚಾಯಿತಿಯಲ್ಲಿ ಡಾ. ಅಂಬೇಡ್ಕರ್ ಅವರ ಫೋಟೋ ಒಂದನ್ನು ತೂಗು ಹಾಕಲು ಯೋಚಿಸಿದರು. ಶಾಲೆಯ ಮುಖ್ಯೋಪಾಧ್ಯಾಪಕರನ್ನೂ ಪಂಚಾಯತಿ ಚೇರ್‌ಮನ್ ಅವರನ್ನೂ ಕಂಡು ಮಾತನಾಡಿದರು. ಅವರೂ ಕೂಡ ಒಪ್ಪಿದರು. ಫೋಟೋ ಕೂಡ ಹಾಕಲಾಯಿತು. ಆದರೆ ಕೆಲ ಕಾರಣಗಳಿಂದ ಪಂಚಾಯಿತಿಯಲ್ಲಿ ಹಾಕಲಾಗಲಿಲ್ಲ. ಇದರಿಂದ ತುಸು ಅಸಮಾಧಾನಗೊಂಡ ದಲಿತರು ತಮ್ಮ ಮನಸ್ಸಿನಲ್ಲೇ ಬೇಸರಗೊಂಡರು. 26 ರಂದು ಶಾಲೆಯಲ್ಲಿ ಒಂದು ಕಾರ್ಯಕ್ರಮದ ಕೊನೆಗೆ ಚಹಾವನ್ನು ಹಂಚುವಾಗ ದಲಿತರಿಗೆ ಮಾತ್ರ ನೀಡದೇ ಉಳಿದ ಜಾತಿಯವರಿಗೆ ಮಾತ್ರ ನೀಡಲಾಯಿತು. ಇಷ್ಟು ಬಹಿರಂಗವಾಗಿಯೇ ಅಸ್ಪೃಶ್ಯತೆ ನಡೆದುದು ಕಂಡು ದಲಿತರು ಬಹಳ ಕೋಪಗೊಂಡರು. ಈ ಭೇದಭಾವವನ್ನು ಅವರು ಪ್ರತಿಭಟಿಸಿ ಹೊರನಡೆದರು.

### "ಎಷ್ಟು ಸೊಕ್ಕು"

'ಹೊಲೆಯ ಮಕ್ಕಳಿಗೆ ಎಷ್ಟು ಸೊಕ್ಕು' ಎಂದು ಇತರ ಜಾತಿಗಳವರು ಇವರನ್ನೇ ಬೈದರು. ಅನಂತರ ಯಾವುದೋ ಪುಟ್ಟ ಪುಟ್ಟ ಕಾರಣಗಳಿಂದಾಗಿ ದಲಿತ ಹಾಗೂ ಸವರ್ಣೀಯ ಹುಡುಗರ ನಡುವೆ ನಡೆದ ಜಗಳ ಗಂಭೀರ ರೂಪು ತಳೆಯಿತು. ಒಂದಿಲ್ಲೊಂದು ಕಾರಣದಿಂದ ದಲಿತರನ್ನೂ ಅವಮಾನಗೊಳಿಸುವುದು, ಹೊಡೆಯುವುದು, ಬೈಯ್ಯುವುದು ಮತ್ತು ಇಲ್ಲಸಲ್ಲದ ಕಾರಣಗಳಿಂದ ದಲಿತರ ಬಗ್ಗೆ ಆಡಿಕೊಳ್ಳುವುದು ಪ್ರಾರಂಭವಾಯಿತು.

ದಿನನಿತ್ಯ ತಮ್ಮ ಕುಟುಂಬಗಳಿಗೆ ಕೂಲಿಯೇ ಸಿಗುತ್ತಿಲ್ಲವಾದ್ದರಿಂದ ಹಲವಾರು ಕುಟುಂಬಗಳು ಊರು ಬಿಟ್ಟು ಹೋಗಲು ಶುರುಮಾಡಿವೆ. ಅಲ್ಲಿಯ ದಲಿತರಿಗೆ ತಮ್ಮ ಜೀವನವೇ ದುರ್ಭರವಾಗಿ ಹೋಗಿದೆ. ಸರ್ಕಾರಿ ಅಧಿಕಾರಿಗಳಿಂದ ಹಿಡಿದು ದಲಿತ ನಾಯಕರುಗಳ ತನಕ ತಮ್ಮ ಗೋಳನ್ನು ಕೇಳುವವರು ಯಾರೂ ಇಲ್ಲವೇನೋ ಎಂದು ಅಲ್ಲಿಯ ದಲಿತರಿಗೆ ಅನಿಸಿಹೋಗಿದೆ. ದಿನನಿತ್ಯದ ಎರಡು ಹೊತ್ತಿನ ಊಟದ ತೊಂದರೆ ಇರುವಾಗ ಕೋರ್ಟು, ಲಾಯರು ಇತ್ಯಾದಿ ತೊಂದರೆಯನ್ನು ನಾವು ಹೇಗೆ ತಾನೇ ಹೊರಬೇಕು ? ಎಂಬುದು ಬಹುತೇಕ ದಲಿತರ ಪ್ರಶ್ನೆಯಾಗಿದೆ.

ಹೆಚ್ಚು ಮಾತಾಡಿದರೆ ಸಾಮಾಜಿಕ ಬಹಿಷ್ಕಾರ ಹಾಕುವುದು ಸಾಮಾನ್ಯವಾಗಿ ಹೋಗಿರುವ ಈ ಭಾಗದಲ್ಲಿ ಇಂಥ ದುರ್ದೆಶೆಯು ಈಗ ಅರ್ಜುನಗಿ ಗ್ರಾಮಕ್ಕೆ ಬಂದಿದೆ. ಇಂಥ ದೆಶೆ ಕೊನೆಗೊಳ್ಳುವುದು ಎಂದು ?

# ಜಮೀನು ವಿವಾದ ದಲಿತನ ಮೇಲೆ ಅಮಾನುಷ ಹಲ್ಲೆ

[ವರದಿ: ಮುನಿರುಪ್ಪ]

ಕೋಲಾರ ಟೌನಿನ ಕಾರಂಜಿಕಟ್ಟೆ ಕೆಳಗಿರುವ ಹರಿಜನ ಕುಟುಂಬಕ್ಕೆ ಸೇರಿದ ಪಿ. ನಾರಾಯಣದಾಸ್‌ರನ್ನು ಅಲ್ಲಿನ ಸವರ್ಣೀಯರು ದಾರಿಯಲ್ಲಿ ಅಡ್ಡಗಟ್ಟಿ ಚೈನು, ದೊಣ್ಣೆ ಮುಂತಾದುವುಗಳಿಂದ ಹಲ್ಲೆ ನಡೆಸಿ ಕೊಲೆಯತ್ನ ನಡೆಸಿರುವುದು ತಿಳಿದು ಬಂದಿದೆ. ಈ ಘಟನೆಗೆ ಭೂಮಿ ವಿವಾದ ಮತ್ತು ಅಸ್ಪೃಶ್ಯತೆ ಆಚರಣೆ ಕಾರಣವಾಗಿದೆ.

ಹಲ್ಲೆಗೊಳಗಾಗಿರುವ ನಾರಾಯಣದಾಸ್ ಕುಟುಂಬದವರು ಸರ್ವೆ ನಂ. 183/3 ನ ಜಮೀನನ್ನು ಹಿರಿಯರ ಕಾಲದಿಂದಲೂ ಸಾಗುವಳಿ ಮಾಡುತ್ತಿದ್ದು, ನಾಲ್ಕು ವರ್ಷಗಳಿಂದ ಭೂನ್ಯಾಯ ಮಂಡಲಿಯಲ್ಲಿ ಮೊಕದ್ದಮೆ ನಡೆಯುತ್ತಿದ್ದು, 26-6-79 ರಂದು ಭೂನ್ಯಾಯಮಂಡಲಿ ಈ ಜಮೀನು ಹಿಂದಿನಿಂದಲೂ ಸಾಗುವಳಿ ಮಾಡುತ್ತಿದ್ದ ನಾರಾಯಣದಾಸ್ 'ಕುಟುಂಬಕ್ಕೆ ಸೇರಿದೆಂದು ತೀರ್ಪಿತ್ತಿದೆ.

ಹೀಗಿರಲು ಅದೇ ಜಮೀನಿನ ಪಕ್ಕ 130 ಸವರ್ಣೀಯರ ಕುಟುಂಬಗಳೂ ಅವರ ದೇವಸ್ಥಾನವೂ ಇದೆ. ದೇವಸ್ಥಾನದ ಪಕ್ಕವೇ ಹರಿಜನರ ಮನೆ ಇದೆ. ಇದನ್ನು ಸಹಿಸದ ಸವರ್ಣೀಯರು ಹರಿಜನರನ್ನು ಅಲ್ಲಿಂದ ಓಡಿಸಲು ಮತ್ತು ಅವರಿಗಾಗಿರುವ ಜಮೀನನ್ನು ತಾವೇ ಪಡೆದುಕೊಳ್ಳಲು ಆಗಾಗ ಕಿರುಕುಳಕೊಡುತ್ತಿದ್ದರು. ಮತ್ತು ಹೈಕೋರ್ಟಿನಿಂದ ತಡೆ ಆಜ್ಞೆ ತಂದಿದ್ದು,

[7ನೇ ಪುಟ ನೋಡಿ]

# ರಾಷ್ಟ್ರ ಸಮಾಜವಾದದ ಬಗೆಗೆ ಡಾ॥ ಬಿ.ಆ

ಮುಖ್ಯ ವಿಷಯವನ್ನು ವಿವೇಚಿಸುವುದಕ್ಕಿಂತ ಮುಂಚೆ, ಸಂಪ್ರದಾಯಬದ್ಧವಾದ ಇಂಡಿಯಾದ ಸಮಾಜವು ಕೆಳಗಿನ ಕೋಮುಗಳ ಅದರಲ್ಲೂ ನಿರ್ದಿಷ್ಟವಾಗಿ ದಲಿತ ಜನಾಂಗದ ಜೊತೆ ತನ್ನ ಸಂಬಂಧವನ್ನು ಯಾವ ರೀತಿಯಾಗಿ ಇಟ್ಟುಕೊಂಡಿದೆ ಎಂಬುದರ ಬಗ್ಗೆ ಪೀಠಿಕಾ ರೂಪದಲ್ಲಿ ಕೆಲವೊಂದು ಮಾತು ಹೇಳಬಯಸುವೆ. ಎರಡನೆಯದಾಗಿ: ಡಾ॥ ಅಂಬೇಡ್ಕರ್ ಅವರು ಈ ರಾಷ್ಟ್ರದ ಈ ಹೊತ್ತಿನ ಆರ್ಥಿಕ ಪರಿಸ್ಥಿತಿ ಮತ್ತು ದಲಿತರ ಬಗ್ಗೆ ಏನು ಯೋಚಿಸಿದ್ದಾರೆಂಬುದನ್ನು ತಿಳಿಯಬೇಕು. ಹಾಗೆಯೇ ರಾಷ್ಟ್ರದ ಹುಟ್ಟು, ಅದರ ಚಟುವಟಿಕೆಗಳು ಮತ್ತು ರಾಷ್ಟ್ರದ ಬಗೆಗೆ ಇರುವ ವಿಭಿನ್ನ ವ್ಯಾಖ್ಯೆಗಳನ್ನೂ ಗಮನಿಸಬೇಕು. ಆಗ ಸಮಾಜವಾದದ ಬಗೆಗೆ, ರಾಷ್ಟ್ರ ಸಮಾಜವಾದದ ಬಗೆಗೆ ಹಾಗೂ ಅವುಗಳಿಂದ ಹೊರಹೊಮ್ಮುವ ತತ್ವದ ಬಗೆಗೆ ಒಂದು ಸ್ಪಷ್ಟ ಅಭಿಪ್ರಾಯವನ್ನು ರೂಪಿಸಿಕೊಳ್ಳಬಹುದು.

**ಇಂಡಿಯಾದ ಸಂಪ್ರದಾಯಬದ್ಧ ಸಮಾಜವು ಅಸ್ಪೃಶ್ಯರ ಜೊತೆ ಇಟ್ಟುಕೊಂಡಿರುವ ಸಂಬಂಧ:**

ಅಂಬೇಡ್ಕರ್ ಅವರು ಇಂಡಿಯಾದ ಸಾಮಾಜಿಕ ಇತಿಹಾಸವನ್ನು ಆಳವಾಗಿ ಅಧ್ಯಯನಿಸಿರುವರು.[1] ಬೇರೆ ರೀತಿಯ ವಿದ್ವಾಂಸರುಗಳಂತಲ್ಲದೆ, ಇವರು ಈ ವ್ಯವಸ್ಥೆಯನ್ನು ಸೂಕ್ಷ್ಮವಾಗಿ ವಿಶ್ಲೇಷಿಸುತ್ತಾ: ಈ ವ್ಯವಸ್ಥೆಯೊಳಗೆ ಹೊಂದಿಕೊಂಡು ಹೋಗುವವರನ್ನು ನಿರ್ದಿಷ್ಟವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ-ಇತ್ಯಾದಿಯಾದ ವರ್ಣಗಳಾಗಿ ಸ್ಪಷ್ಟವಾಗಿ ಗುರ್ತಿಸಲು ಸಾಧ್ಯವಿಲ್ಲ. ಹಾಗೇನಾದರೂ ಆಗಿದ್ದರೆ ಇಲ್ಲಿ ನಾಲ್ಕು ಸಾವಿರ ಜಾತಿಗಳು ಉಂಟಾಗುತ್ತಲೇ ಇರಲಿಲ್ಲ ಎಂದಿರುವರು.[2]

ವರ್ಣಗಳು ಮಲಿನವಾಗಿರುವ ವಿಷಯವನ್ನು ಇವರು ಈ ರೀತಿಯಾಗಿ ಗ್ರಹಿಸುವರು: ಯಾವ ಪುರೋಹಿತಶಾಹಿ ಜನಾಂಗ ಈಹೊತ್ತು ವರ್ಣಗಳಲ್ಲಿ ಮೊದಲನೆಯ ದರ್ಜೆಯ ಪಟ್ಟವನ್ನು ಪಡೆದುಕೊಂಡಿದೆಯೋ ಅದೇ ಈಗ ಹೆಚ್ಚು ಮಲಿನವಾಗಿದೆ. ಪುರೋಹಿತ ಮತ್ತು ಪಾವಿತ್ರ್ಯ ಎಂಬುವು ಹಳೆಯ ಸಂಬಂಧಗಳು. ಮಲಿನವಾಗುವುದರ ಅರ್ಥವೇನೆಂದರೆ ಅದು ಜಾತಿಗಳ ಮತ್ತು ಆಯಾ ಸಮಾಜದ ಪರಿಶುದ್ಧತೆಯನ್ನು ಸೂಚಿಸುವುದೆಂಬುದೇ ಇವರ ಅಭಿಪ್ರಾಯ.[3] ಜಾತಿಗಳ ಹುಟ್ಟಿನ ಬಗ್ಗೆ ತಮ್ಮ ಸಿದ್ಧಾಂತವನ್ನು ಮುಂದಿಡುತ್ತಾ: ಬ್ರಾಹ್ಮಣರು ತಮ್ಮಷ್ಟಕ್ಕೆ ತಾವೇ ತಮ್ಮ ವರ್ಗದವರನ್ನು ಒಗ್ಗೂಡಿಸಿಕೊಂಡಂತಹ ಈ ಸಂಗತಿಯೇ ಇತರ ಜಾತಿಗಳವರಿಗೆ ಅನುಕರಣೆಯ ಅಂಶವಾಗಿ ಪರಿಣಮಿಸಿತು ಎಂದಿರುವರು[4]. ಇಂಡಿಯಾದ ಸಾಮಾಜಿಕ ವ್ಯವಸ್ಥೆಯು ಜಾತಿಯ ಮೆಟ್ಟಿಲುಗಳನ್ನೊಳಗೊಂಡಿದೆ. ಮೆಟ್ಟಿಲನ್ನು ಹತ್ತಿ ಮೇಲಕ್ಕೆ ಹೋದಂತೆ ಪೂಜ್ಯ ಭಾವನೆಯೂ ಮೆಟ್ಟಿಲನ್ನು ಇಳಿದು ಕೆಳಗೆ ಬಂದಂತೆ ತಿರಸ್ಕಾರ ಭಾವನೆಯೂ ಇಲ್ಲಿ ಮೂಡುವುದು. ಅದರಿಂದ ಈ ವ್ಯವಸ್ಥೆಯಲ್ಲಿ ಸಮಾನತೆ ಭಾತೃತ್ವ ಮೊದಲಾದ ಭಾವನಾತ್ಮಕ ಅಂಶಗಳು ಬೆಳೆಯುವ ಸಾಧ್ಯತೆ ಇಲ್ಲವೇ ಇಲ್ಲ.

ಮೊದಮೊದಲು ಕೇವಲ ಮೂರು ವರ್ಣಗಳು ಮಾತ್ರ ಇದ್ದುವೆಂದು ಹೇಳಲಾಗಿದೆ. ಯಾವುವೆಂದರೆ-ಕ್ಷತ್ರಿಯರು (ಯುದ್ಧ ಮಾಡುವವರು), ಬ್ರಾಹ್ಮಣರು (ಪುರೋಹಿತರು) ಮತ್ತು ಇವೆರಡು ವರ್ಗದವರಿಗೂ ಎಲ್ಲಾ ತರಹದ ಸಹಾಯವನ್ನು ಮಾಡಬಲ್ಲಂಥ ವೈಶ್ಯರು (ವ್ಯಾಪಾರಿಗಳು ಮತ್ತು ಕೃಷಿಕರು). ವೈಜ್ಞಾನಿಕ ದೃಷ್ಟಿಯಿಂದ ಯೋಚಿಸಿದಾಗ ಯುದ್ಧ ಮಾಡುವ ಕ್ಷತ್ರಿಯ ಜನಾಂಗದವರು ತಮ್ಮ ಅರ್ಹತೆಯ ಮೇಲೆ ಮೊದಲನೆಯವರಾಗಿದ್ದರು.[5] ಈ ವರ್ಗದವರ ಮುಖ್ಯವಾದ ಕೆಲಸವೆಂದರೆ ಯುದ್ಧಮಾಡುವುದು. ಯಾವುದೇ ಯುದ್ಧವು ಪೂಜೆ ಪುರಸ್ಕಾರ ಇತ್ಯಾದಿಯಾದ ಕರ್ಮಗಳು ನಡೆಯದೇ ಶುರುವಾಗುತ್ತಿರಲಿಲ್ಲವಾದುದರಿಂದ; ಕ್ರಮೇಣ ಪುರೋಹಿತವರ್ಗ ಮೇಲೆ ಹೇಳಿದ ಕ್ಷತ್ರಿಯ ಕುಲಕ್ಕಿಂತ ಸ್ವಲ್ಪ ಹಿರಿದಾದ ಸ್ಥಾನವನ್ನು ಗಳಿಸಿಕೊಂಡಿತು. ಇದೇ ರೀತಿಯ ಪೂಜಾ ವಿಧಾನಗಳು ಕೃಷಿ ವಿಭಾಗದಲ್ಲೂ ಬಹಳ ಮುಖ್ಯವಾದ ಸ್ಥಾನವನ್ನು ಗಳಿಸಿಕೊಂಡಿದ್ದವು. ಬೌದ್ಧರಿಗಿಂತ ಮುಂಚೆಯಿಂದಲೇ ಬ್ರಾಹ್ಮಣ ಮತ್ತು ಕ್ಷತ್ರಿಯ ವರ್ಗದವರು ತಮ್ಮ ತಮ್ಮ ಘನತೆಗಳನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸುತ್ತಲೇ ಇದ್ದರು ಹಾಗೂ ಇದಕ್ಕಾಗಿ ಇವೆರಡು ವರ್ಣಗಳ ನಡುವೆ ಕೆಲವೊಂದು ಸಲ ಘೋರವಾದ ಯುದ್ಧಗಳೂ ನಡೆಯುತ್ತಿದ್ದವು.[6]

ಮೂಲ: ಡಿ. ಎಚ್. ಶ್ರೀಕಾಂತ್

ಅನು : ದೇವಯ್ಯ ಹರವೆ

# ದಲಿತರಿಗೆ ಮೀಸಲಾತಿ ಸವಲತ್ತು ಕು

ಕಳೆದ ಮೂರು ವರ್ಷಗಳಲ್ಲಿ ಇಂಡಿಯಾದ ಪ್ರಧಾನಿಯಾಗುವ ಮೂರು ಅವಕಾಶಗಳಿಂದಲೂ ವಂಚಿತರಾಗಿ ಈಗ ಮುಂದಿನ ಅವಕಾಶಗಳಿಗಾಗಿ ಎದುರು ನೋಡುತ್ತಿರುವ ಜಗಜೀವನರಾಂರವರು "1977 ರಲ್ಲಿ ಜೆ. ಪಿ. ಮತ್ತು ಕೃಪಲಾನಿ ಅವರು ಪ್ರಧಾನಿ ಪಟ್ಟದ ವ್ಯಕ್ತಿಯನ್ನು ಆರಿಸಿದರು (?) ಈಗ ರಾಷ್ಟ್ರಾಧ್ಯಕ್ಷರು ನಾನು ಪ್ರಧಾನಿಯಾಗುವುದನ್ನು ತಪ್ಪಿಸಿದರು" ಎಂದು ಇತ್ತೀಚಿನ "ಇಂಡಿಯಾ ಟುಡೇ" ಪಾಕ್ಷಿಕ ಪತ್ರಿಕೆಗೆ ನೀಡಿದ ಸಂದರ್ಶನದಲ್ಲಿ ತಿಳಿಸಿದ್ದಾರೆ.

ಸಂದರ್ಶನಕಾರರ ಕೆಲವು ಪ್ರಶ್ನೆಗಳಿಗೆ ಅವರು ಕೆಳಕಂಡಂತೆ ಉತ್ತರಿಸಿದ್ದಾರೆ:

ಪ್ರ: ಸರ್ಕಾರ ಹರಿಜನರನ್ನು ಅಗತ್ಯಕ್ಕಿಂತ ಹೆಚ್ಚಾಗಿ ಪಾಲಿಸುತ್ತಿದೆ ಎನ್ನುವ ಭಾವನೆ ದೇಶದಲ್ಲಿ ಹಬ್ಬಿದೆ. ಅವರನ್ನು ಇಂಡಿಯಾದ ನವ ಬ್ರಾಹ್ಮಣರು ಎಂದೂ ವರ್ಣಿಸಲಾಗುತ್ತಿದೆ. ನಿಮ್ಮ ಅಭಿಪ್ರಾಯ ?

ರಾಂ: ಹರಿಜನರೂ ಬ್ರಾಹ್ಮಣರಾಗಿಬಿಟ್ಟಿದ್ದರೆ ಚೆನ್ನಾಗಿತ್ತೆಂದು ಅನ್ನಿಸುತ್ತದೆ. ಹಾಗೆ ಒಂದು ತಾಸಾದರೂ ಅವರು ಬ್ರಾಹ್ಮಣರ ಅಂತಸ್ತನ್ನು ಅನುಭವಿಸಲಿ ಬಿಡಿ. ಹರಿಜನರು ಅಗತ್ಯಕ್ಕಿಂತ ಹೆಚ್ಚು ಸವಲತ್ತನ್ನು ಅನುಭವಿಸುತ್ತಿದ್ದಾರೆ ಎನ್ನುವುದು ಸವರ್ಣ ಹಿಂದೂಗಳ ಒಂದು ಗುಂಪಿನ ಕೂಗು ಅಷ್ಟೆ.

# ...ಅಂಬೇಡ್ಕರ್ ವಿಶ್ಲೇಷಣೆ

...ಗಳೂ ತಮ್ಮ ತಮ್ಮ ಸ್ಥಾನವನ್ನು
...ಳ್ಳಲು ಬೇರೆ ಬೇರೆ ಮಾರ್ಗಗ
...ದರು. ಇದರ ಫಲವಾಗಿಯೇ
...ಗಳ ನಡುವೆ ಒಂದು ರೀತಿಯಲ್ಲಿ
...ಬಂಧ ಬೆಳೆಯಿತು. ಈ ಕಾರಣ
...ನಾದರೊಬ್ಬ ಅಥವಾ ಒಂದು
...ರ ಅಧಿಕಾರವನ್ನು ವಿರೋಧಿಸು
...ಮನುಷ್ಯತ್ವವನ್ನೇ ಹಾಳುಮಾಡಿ
...ಕುತರವಾದ ಭಾವನೆಯು ಬೆಳೆ
...ರ ಆಶ್ರಯದಲ್ಲಿದ್ದು ಸುಖಿಸು
...ರ ಜಾಣ್ಮೆಯಿಂದಾಗಿ ಸಮಾಜ
...ು ಭಾವನೆಯು ಬೇರುಬಿಡಲು
... ಹೀಗೆಯೇ ಚಾಣಾಕ್ಷತನ
...ಹಿತವರ್ಗ ಸಾಧ್ಯವಾದಷ್ಟು
...ಕೀಯ ಅಧಿಕಾರವನ್ನು ಕ್ಷತ್ರಿ
... ಅನುಭವಿಸುತ್ತಲೇ ಬಂದಿರು

...ನತೆಯನ್ನು ಕುರಿತು ಯೋಚಿ
...ದಲ್ಲಿ; ಅನೇಕ ರೀತಿಯ
...ಕಟ್ಟಳೆಗಳನ್ನು ಸೃಷ್ಟಿಸಿ ಆ
...ದ್ರರು ಹೆದರುವಂತೆ ಮಾಡಿ
...ತ್ತು ಈ ಕಾರಣದಿಂದಲೇ
...ಕೈ ಅನ್ನು ರಾಷ್ಟ್ರಪ್ರಭುತ್ವದ

ಎತ್ತದೇ ಇರುವುದನ್ನು ಮರೆಯುವಂತಿಲ್ಲ. ಈ ರೀತಿಯ ಪೊಳ್ಳು ಧಾರ್ಮಿಕ ಸಮರ್ಥನೆಯಿಂದಾಗಿ ಮೇಲುವರ್ಗದವರ ಸವಲತ್ತುಗಳು ಮತ್ತೂ ಹೆಚ್ಚಾದುವು. ಅದರಿಂದ ಪ್ರಭುತ್ವ-ಸೈನ್ಯ ಇತ್ಯಾದಿಯಾಗಿರುವ ಬಹಳ ಮುಖ್ಯ ಶಕ್ತಿಗಳಿಂದ ಶೂದ್ರರು ಬಹಿಷ್ಕೃತರಾದರು. ಹಾಗಾಗಿ ಯಾರ ಕೈಲಿ ಸೈನ್ಯವಿದೆಯೋ ಅವರು ತಮ್ಮ ಅಧಿಕಾರವನ್ನು 'ದಂಡ' ಹಾಕುವುದರ ಮುಖೇನ, 'ಬಹಿಷ್ಕಾರ' ಹಾಕುವುದರ ಮುಖೇನ ಚಲಾಯಿಸುತ್ತಿದ್ದರು. ಇದು ರಾಜ ನ್ಯಾಯದ ಒಂದು ರೀತಿಯಾಗಿತ್ತು[8]. ಸಮಾಜದ ಉತ್ತಮವರ್ಗ ಮುಖ್ಯ ಉತ್ಪಾದನೆಯ ಅಂಗಗಳನ್ನು ಹೊಂದಿರುತ್ತಿತ್ತು. ಮುಂದೆ ಇದೇ ಅವಶ್ಯಕವಾಗಿ ಆಡಳಿತ ನಡೆಸಬೇಕಾಗುತ್ತಿತ್ತು; ಇದೇ ವರ್ಗ ರಾಜಕೀಯ ಪ್ರಭುತ್ವವನ್ನು-ಮಿಲಿಟರಿ ಅಧಿಕಾರವನ್ನು-ಬೌದ್ಧಿಕ ವಿಚಾರಗಳನ್ನು ನಿರ್ವಹಿಸುವ ಕೇಂದ್ರಗಳನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡಿರುತ್ತಿತ್ತು.[9] ಶ್ರೀಮಂತ ಉತ್ತಮ ಕುಲದವರು ರಾಜ್ಯಾಡಳಿತದ ಮೇಲೆ, ಮಿಲಿಟರಿ ಶಕ್ತಿಯ ಮೇಲೆ, ವಿದ್ಯಾಕೇಂದ್ರಗಳ ಮೇಲೆ ತಮ್ಮ ಹತೋಟಿಯನ್ನು ಇಟ್ಟುಕೊಂಡಿ

[6ನೇ ಪುಟ ನೋಡಿ]

# ...ಜಗಜೀವನರಾಂ ಅಭಿಮತ

...ಕಾರದ ಮೇಲೆ ಏಕೆ ಹುದ್ದೆಗಳ
...ತಬೇಕು ? ಆರ್ಥಿಕ ಅಂಶಗಳ
... ಇದನ್ನು ಏಕೆ ಮಾಡಬಾರದು?

...ಡವಳಿಕೆಗಳಿಂದಾಗಿ ಈ ದೇಶ
...ೂ ಆರ್ಥಿಕ ಮಾನದಂಡಗಳು
...ರವು. ಅಡಿಗೆ ಭಟ್ಟನ ಕೆಲಸ
...ಬ್ರಾಹ್ಮಣ ತನ್ನ ಅಬ್ರಾಹ್ಮಣ
... ತಾನು ಹೆಚ್ಚು ಎಂದು ಬೀಗು
...ವೆ? ಆರ್ಥಿಕ ಅಂಶಗಳ ಆಧಾ
...ದೇಶದಲ್ಲಿ ಏನೇನನ್ನೂ ಮಾಡ
... ಸಾಮಾಜಿಕ ಸ್ಥಾನವನ್ನು ನಿರ್ಣ
... ಭಾವಗಳ' ಮೂಲಕ ಜನರು

ಉನ್ನತಹುದ್ದೆಗಳನ್ನು ಪಡೆಯುತ್ತಿರುವುದು ನಿಮಗೆ ಗೊತ್ತಿಲ್ಲವೆ ? ಯಾಕೆ ಹರಿಜನರು ಮಾತ್ರ ಶತಮಾನಗಳಿಂದ ಮಾಡಿರುವುದನ್ನೇ ಮಾಡುತ್ತಿರಬೇಕು ? ಅವರು ಒಳ್ಳೆಯ ಬದುಕು ಬದುಕಬಾರದೆ ?

ಪ್ರ: ಆದರೆ ಮೀಸಲಾತಿ ಜಾತಿ ಸಮಸ್ಯೆಯನ್ನು ಬಗೆಹರಿಸಲಾರದು ಅನಿಸುತ್ತದೆ.

ರಾಂ: ಇದು ಜಾತಿ ಸಮಸ್ಯೆ ಅಲ್ಲ. ಹಿಂದುಳಿದವರ ಬದುಕನ್ನು ಉತ್ತಮಪಡಿಸಲು ಬೇರೆ ಯಾವ ಮಾರ್ಗವೂ ಇಲ್ಲ.

[7ನೇ ಪುಟ ನೋಡಿ]

## ನಾನಾತರಂ

ಸಾಸಿರ–ಸಾಸಿರ-
ದುಃಖ ದೌರ್ಜನ್ಯಗಳ–
'ಬಲಿಗಾಗಿಯೇ' ಹುಟ್ಟಿದವರಾ–
ಪೆಟ್ರೋಲು ಬೆಂಕಿಯ,
ಬಗೆದದರ ಎದೆಯ,
ಇತಿಹಾಸದ ಘೋರಾಧ್ಯಾಯವೆಂದು,
ಸಾರಿ ಸಾಸಿ ತೋರಿದೆಯೆಂದು,
ಸಂತಾನ ಬೇರೆಯೆಂದು,

ಕೇಳು ಜಗಮಾದಿಗ ಹೊಲೆಯ-
ಅವರಾಮಹಾದರತದಲ್ಲಿ,
ನರಹತ್ಯೋದ್ಯಾನ ಪರ್ವ ದಾಟುವಾಗ,
ಅಲ್ಲೇ ಕಾಣುವ-
ಭಾರತೀಪುರದ ಜೈಲಿನಲ್ಲಿ,
ಹಸಿಹಸಿವಿನಲಿ
ವಸಿ ವಸಿಯೇ ಹರಿದ-
ದಶಾನುದಶಕ ಜೀವಸ್ರಾವಿಂದ,
ತಯಾರಿಸಿದ ಪಗಡೆಯಿದು.

ಮೊನ್ನೆ ಕೇ.......ಸ್
ಗೊತ್ತು ತಾನೆ ?

ಆಹಾದರಾಜಕಾರಣಿ-
ಪಾಂಡುವಿಜಯ ಪ್ರಕಾಶನಾರಾಯಣನ,
ಕಿಡ್ನಿ ಮೇಲ್ ಜಡಾಯಿಸಿದ ಕಿಕ್-
'ಒಂದೇ ಮಾತರಂ',
ಬೋಸಡಿಮಗ ಪೈಸಲ್ !

ಆದ್ದರಿಂದ-
ಲೇ ಬ್ರದರು........
ಅರ್ಜಿಗಳಗುಜರಿದರೆ,
ಮುಜರೆಗಳ ಒದ್ದರಿದರೆ,
ಜೀತಗಾರಗುದುರಿದೀ–
ಹರಾಮುಕೋರರ ಸಿಗಿಯದೆ,
ದೊರೆಯದಣ್ಣ ಮುಕುತಿ.

ನೀ 'ಹೂಂ' ಅಂದರೆ ಸಾಕು,
ಅವನಕ್ಕನ್........
ಸಾಸಿರ-ಸಾಸಿರ-
ಸಾಕಿ-ಬಾಕಿಗಳ-
ದಶಕ-ಶತಕಗಳ–
'ಬಲಿಗಾಗಿಯೆ' ಹುಟ್ಟಿರುವಾ-
ಪೆಟ್ರೋಲು, ಬಿಲ್ಡಿಂಗು,
ಬ್ಯಾಂಕು, ಗಂಟೆ, ಜಾಗಟೆ-
ಎಲ್ಲದಕ್ಕೂ–
ಊರಾಚೆಯ ಆ ನನ್ನ
ಕಿಡಿಬೆಂಕಿಯ-
'ಒಂದೇ ಮಾತರಂ'

—ಮನಜ

# ರಾಷ್ಟ್ರ ಸಮಾಜವಾದದ ಬಗೆಗೆ ಡಾ॥ ಬಿ. ಆರ್. ಅಂಬೇಡ್ಕರ್ ವಿಶ್ಲೇಷಣೆ

[ಮಧ್ಯದ ಪುಟದಿಂದ]

ದ್ದರು. ಕೆಳವರ್ಗದ ಜನರು ಈ ಸಂಸ್ಥೆಗಳ ಒಳಗೆ ಪ್ರವೇಶಿಸದಂತೆ ತಡೆದಿದ್ದರು ಮಾತ್ರವಲ್ಲ, ಮೇಲುವರ್ಗದವರು ಮನಸ್ಸು ಮಾಡಿದರೆ ಶಿಕ್ಷಿಸಲೂಬಹುದಿತ್ತು.

ವಿಶಾಲವಾದ ಅರ್ಥದಲ್ಲಿ ಹೇಳುವುದಾದರೆ ಮೊದಲನೆಯದಾಗಿ: ಬ್ರಿಟೀಷರು ಈ ದೇಶದ ಆಡಳಿತ ಸೂತ್ರವನ್ನು ಹಿಡಿದಮೇಲೆ, ಹೊಸ ಹೊಸ ನಿಯಮಗಳನ್ನು ಮತ್ತು ಕಾನೂನುಗಳನ್ನು ರೂಪಿಸಿದ ಮೇಲೆ ಈ ದೇಶದ ಹಳೆಯ ಸಾಮಾಜಿಕ-ಆರ್ಥಿಕ ವ್ಯವಸ್ಥೆಗೆ ಬಲವಾದ ಪೆಟ್ಟು ಬಿತ್ತು.[10] ಹೊಸ ರಾಜಕೀಯ ಶಕ್ತಿಯಲ್ಲಿ ಹೊಸ ಉತ್ಪಾದನಾ ನಿಯಮಗಳು (ಕಾರ್ಖಾನೆಯಲ್ಲಿ, ಕೃಷಿಯಲ್ಲಿ) ರೂಪುಗೊಂಡ ಮೇಲೆ ಕೆಳಜಾತಿಯ ಕೆಲವು ಮಂದಿ ಸದಸ್ಯರು ಜಾತಿ ಸಂಸ್ಥೆಗಳಾಗಿಯೇ ಉಳಿದಿದ್ದ ಸಂಸ್ಥೆಗಳಿಗೆ ಸೇರುವಂತಾಯಿತು. ಎರಡನೆಯದಾಗಿ: ಡಾ॥ ಬಿ. ಆರ್. ಅಂಬೇಡ್ಕರ್ ಅವರ ನೇತೃತ್ವದಲ್ಲಿ ನಡೆದಂಥ ಹೋರಾಟಗಳು ಮತ್ತು ಚಳುವಳಿಗಳು ಜನರಲ್ಲಿ ಒಂದು ರೀತಿಯ ಆತ್ಮಗೌರವ ಬೆಳೆಸಿಕೊಳ್ಳುವುದಕ್ಕೆ ಸಹಾಯವಾದುವಲ್ಲದೆ ಈಗಾಗಲೇ ಹಿಂದೂ ಧರ್ಮದಲ್ಲಿ ಜಾರಿಯಲ್ಲಿದ್ದ ಅಂಧಶ್ರದ್ಧೆ, ಮೂಢ ನಂಬಿಕೆ ಇತ್ಯಾದಿಗಳ ವಿರುದ್ಧ ದಂಗೆ ಏಳುವಂಥ ಮನಸ್ಥಿತಿಯನ್ನು ಕೆಳವರ್ಗದ ಜನರಲ್ಲಿ ಮೂಡಿಸಿದುವು. ಆದರೂ ಇಂಡಿಯಾದ ಹಳೆಯ ಆರ್ಥಿಕ-ಸಾಮಾಜಿಕ ವ್ಯವಸ್ಥೆಯಲ್ಲಿ ಅಂತಹ ಮೂಲಭೂತ ಬದಲಾವಣೆಯೇನೂ ಆಗಲಿಲ್ಲ.

**ಈ ಹೊತ್ತಿನ ಆರ್ಥಿಕ ಪರಿಸ್ಥಿತಿ ಮತ್ತು ದಲಿತರು :**

ಅಂಬೇಡ್ಕರ್ ಅವರ ರೀತಿ ಈ ಹೊತ್ತಿನ ಸಮಾಜದ ಆರ್ಥಿಕ ಸ್ಥಿತಿಯು ಖಾಸಗೀ ಉದ್ದಿಮೆ ಮತ್ತು ವೈಯಕ್ತಿಕವಾದ ಕಸುಬುಗಳನ್ನು ಅವಲಂಬಿಸಿರುವಂಥದ್ದು.[11] ಒಂದು ಕಡೆ ಬಹುರೀತಿಯ ಸ್ವತ್ತನ್ನು ಹೊಂದಿರುವ ಅಲ್ಪಸಂಖ್ಯಾತ ಜನ ಇಡೀ ದೇಶದ ಮುಖ್ಯ ಉತ್ಪಾದನಾ ಮೂಲಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದರೆ, ಮತ್ತೊಂದು ಕಡೆ ಎಪ್ಪತ್ತು ಮಿಲಿಯನ್ ದಲಿತರನ್ನೂ ಸೇರಿಸಿಕೊಂಡು ಬಹುಸಂಖ್ಯಾತ ಬಡವರು ಏನನ್ನೂ ಹೊಂದಿಲ್ಲ ಹಾಗೂ ಬದುಕುವುದಕ್ಕಾಗಿ ತಮ್ಮ ವಂಶಪಾರಂಪರ್ಯವಾದ ಕಸುಬುಗಳನ್ನು ಆಧರಿಸಿಕೊಂಡಿರುವರು.[12]

ಸಾಮಾಜಿಕವಾಗಿ - ಭೌಗೋಳಿಕವಾಗಿ ಬೇರ್ಪಡಿಸಲಾಗದಂಥ ಸ್ಥಳಗಳಲ್ಲಿ ಅಂದರೆ ಹೆಚ್ಚು ಕಮ್ಮಿ ಊರಿಂದ ಹೊರಗೆ ದಲಿತರು ವಾಸಿಸುತ್ತಾರೆ. ಅವರ ಆರ್ಥಿಕ ಸ್ಥಿತಿ ತುಂಬ ಶೋಚನೀಯವಾದುದು. ಅವರಲ್ಲಿ ಬಹಳ ಮಂದಿ ಭೂಮಿ ಇಲ್ಲದ ಕೃಷಿಕಾರ್ಮಿಕರು. ಈ ರೀತಿಯ ಆರ್ಥಿಕ ಅವಲಂಬನೆಯು ಅಂಬೇಡ್ಕರ್ ಅವರ ಪ್ರಕಾರ ಬೇರೊಂದು ಪರಿಣಾಮವಾದ ಬಡತನ ಮತ್ತು ನಶಿಸಿ ಹೋಗುವುದಕ್ಕೆ ಕಾರಣವಾಯಿತು. ಹಿಂದೂ ಎನ್ನುವ ಜೀವನದ ವಿಧಿ ಮತ್ತು ಧರ್ಮದ ಅಂಗ. ಈ ಧರ್ಮ ಹಿಂದೂ ಆದವನಿಗೆ ಅನೇಕ ರೀತಿಯ ಸವಲತ್ತುಗಳನ್ನೂ ಹಾಗೆಯೇ ದಲಿತನಾದವನಿಗೆ ಅವಮಾನದ ರಾಶಿಯನ್ನೂ ಹೆಚ್ಚಿಸಿದೆ. ಈ ಹಿಂದೂ ವ್ಯವಸ್ಥೆಯಲ್ಲಿ ಮುಕ್ತವಾದ ಹಾಗೂ ಗೌರವಾನ್ವಿತ ಬಾಳುವಿಕೆಗಾಗಿ ಅನೇಕ ರೀತಿಯ ಹೋರಾಟ ನಡೆಸಿರುವ ದಲಿತರೇ, ಈ ರೀತಿಯ ಹೋರಾಟದಲ್ಲಾಗುವ ಅಡೆತಡೆಗಳನ್ನು ಕಂಡುಕೊಂಡಿರುವರು. ಹಿಂದುಗಳೇ ಆದ ಆರ್ಥಿಕ ಸಾಮಾಜಿಕ ಮುಂದುವರಿದ ಜನಾಂಗಕ್ಕೂ ಮತ್ತು ಆರ್ಥಿಕ ಸಾಮಾಜಿಕವಾಗಿ ತೀರಾ ಹಿಂದುಳಿದ ದಲಿತ ಜನಾಂಗಕ್ಕೂ ಒಂದು ಸ್ಪರ್ಧೆಯೇ ನಡೆಯುತ್ತಿದೆ. ಈ ರೀತಿಯ ಸ್ಪರ್ಧೆಯಲ್ಲಿ ಮೇಲುವರ್ಗದ ಹಿಂದುಳಿದವರು ಬಳಸುವ ಆಯುಧವೆಂದರೆ 'ಆರ್ಥಿಕ ಶಕ್ತಿ', ಇದನ್ನೇ ದಲಿತರ ಮೇಲೆ ಬೀಸಿ ಅವರು ಯಾವಾಗಲೂ ಗುಲಾಮರಾಗಿರುವಂತೆಯೇ ಮಾಡುವರು.[13]

ಆದರಿಂದ ಡಾ. ಅಂಬೇಡ್ಕರ್ ನಮ್ಮನ್ನು ನಿಜವಾದ ವಿಷಯದ ಕಡೆಗೆ ಗಮನ ಸೆಳೆಯುವರು. ಅದೆಂದರೆ ಈ ದೇಶದ ಪ್ರಜೆಗಳು ಯಾರು ನಿಜವಾಗಿಯೂ ಆರ್ಥಿಕ ಶೋಷಣೆಗೆ ಒಳಗಾಗಿರುವರೋ ಅಂಥವರು ಸಂವಿಧಾನಾತ್ಮಕವಾದ ಸಮಾನತೆ ಮತ್ತು ಸ್ವಾತಂತ್ರ್ಯಗಳನ್ನು ಪಡೆಯುವತ್ತ ಯೋಚಿಸಬೇಕಾಗಿದೆ. ಯಾಕೆಂದರೆ ಯಾವನೇ ಆದರೂ ಮೊದಲು ಅನೇಕ ರೀತಿಯ ಸವಲತ್ತುಗಳನ್ನು ಮತ್ತು ಅನ್ನವನ್ನು ಪಡೆಯುವಂತಾಗಬೇಕು. ಎರಡನೆಯದಾಗಿ ಶ್ರೀಮಂತ ವ್ಯಕ್ತಿಗಳು ಇತರ ವ್ಯಕ್ತಿಗಳ ಮೇಲೆ ಇಟ್ಟುಕೊಂಡಿರುವ ಹಿಡಿತವನ್ನು ಕಳಚಬೇಕು[14]. ಆದರೆ ಈವಾಗ ದಲಿತರು ತಮ್ಮ ಜೀವನಕ್ಕಾಗಿ ಇತರರನ್ನು ಆಶ್ರಯಿಸಬೇಕಾಗಿದೆ. ಇಂಥ ಸಂದರ್ಭದಲ್ಲಿ ಇವರೆಲ್ಲಾ ಚಟುವಟಿಕೆಗಳೂ ಸಿರಿವಂತರಿಂದ ನಿಯೋಜಿತವಾಗಿರುವುವು. ಇದಲ್ಲದೆ ಸವರ್ಣೀಯ ಹಿಂದೂಗಳು, ಇವನ ಕಡೆಯ ಗೂಂಡಾಗಳು ಕೊಡಬಹುದಾದ ಕಿರುಕುಳಗಳನ್ನು ಸೃಷ್ಟಿಸಬಹುದಾದ ಅವಮಾನಕರ ಸಂಗತಿಗಳನ್ನು ಬಲತ್ಕಾರವಾಗಿಯೇ ದಲಿತರು ಒಪ್ಪಬೇಕಾಗುವುದು.

ಹೀಗಾಗಿ ರಾಷ್ಟ್ರ ಎನ್ನುವುದು ಸಿರಿವಂತರ ಮತ್ತು ಜಾತಿ ಭಾವನೆಯ ಜನರ ಕೈಲಿರುವುದು. ಇಂಥ ರಾಷ್ಟ್ರ ಅಧಿಕಾರವನ್ನು ತನ್ನ ಅಂಗಗಳಿಗೆ (ಮಿಲಿಟರಿ ಮತ್ತು ಪೋಲೀಸ್) ಮತ್ತು ಖಾಸಗೀ ವ್ಯಕ್ತಿಗಳಿಗೆ ಹಸ್ತಾಂತರ ಮಾಡಿ ದಲಿತರ ಮೇಲೆ ತನ್ನ ಅಧಿಕಾರ ಚಲಾಯಿಸುತ್ತಾ ಈಗಿರುವ ಸಾಮಾಜಿಕ-ಆರ್ಥಿಕ ಚೌಕಟ್ಟು ಹಾಗೇ ಮುಂದುವರಿಯುವಂತೆ ಮಾಡಿರುವುದು. ಇದರಿಂದ ಈ ಸಂದರ್ಭದಲ್ಲಿ ರಾಷ್ಟ್ರದ ಹುಟ್ಟು ಮತ್ತು ಅದರ ಕಾರ್ಯವ್ಯಾಪ್ತಿಯನ್ನು ಸಂಕ್ಷಿಪ್ತವಾಗಿ ತಿಳಿಯೋಣ. ಇದು ನಮಗೆ ರಾಷ್ಟ್ರದ ಬಗ್ಗೆ ಇರುವ ಇತರೇ ವ್ಯಾಖ್ಯಾನಗಳನ್ನು ಗಮನಿಸಲು ಹಾಗೂ ನಿಜವಾಗಿ ರಾಷ್ಟ್ರ ಯಾರ ಆಸಕ್ತಿಗನುಗುಣವಾಗಿ ತನ್ನ ಚಟುವಟಿಕೆ ನಡೆಸುತ್ತದೆಂದೂ ಸ್ಪಷ್ಟವಾಗಿ ತಿಳಿಯುವುದು.

[ಮುಂದುವರಿಯುವುದು]

## 8 ಮಂದಿ ಹರಿಜನರ ಸಾಮೂಹಿಕ ನರಹತ್ಯೆ

ಫತೇಪುರ : ಇಲ್ಲಿಗೆ ಸಮೀಪದ ಲಾಹಾರಿ ಹಳ್ಳಿಯಲ್ಲಿ ಸೆಪ್ಟೆಂಬರ್ 10 ರಂದು ಒಬ್ಬ ಮುದುಕಿಯೊಬ್ಬಳೂ ಸೇರಿದಂತೆ ಎಂಟು ಮಂದಿ ಹರಿಜನರನ್ನು ಅಪಹರಿಸಿ ಅವರನ್ನೆಲ್ಲ ಕೊಂದು ಗಂಗೆಯಲ್ಲಿ ಎಸೆಯಲಾಗಿದೆ.

ಈ ಸಾಮೂಹಿಕ ನರಹತ್ಯೆಗೆ ಸಂಬಂಧಿಸಿದಂತೆ ಇತ್ತೀಚೆಗೆ ಎರಡು ಶವಗಳು ಮಾತ್ರ ದೊರೆತಿವೆ.

# ದಲಿತರಿಗೆ ಮೀಸಲಾತಿ–ಸವಲತ್ತು : ರಾಂ ಅಭಿಮತ

[ಮಧ್ಯದ ಪುಟದಿಂದ]

**ಪ್ರ:** ಮೇಲ್ಜಾತಿ ಜನರು ಉತ್ತಮವಾಗಿ ಬದುಕುತ್ತಿದ್ದಾರೆ ಎಂದು ಭಾವಿಸಿದ್ದೀರಿ. ಉದಾಹರಣೆಗೆ ಕರ್ನಾಟಕ ಮತ್ತು ತಮಿಳುನಾಡುಗಳಲ್ಲಿ ಬ್ರಾಹ್ಮಣರಿಗೆ ಕೆಲಸ ಸಿಕ್ಕುವುದೇ ದುಸ್ಥಾರವಾಗಿದೆ ?

**ರಾಂ:** ಅಂಥ ಸಮಯದಲ್ಲಿ ಬ್ರಾಹ್ಮಣರಿಗೂ ನಾನು ಮೀಸಲಾತಿ ಇಡುತ್ತೇನೆ.

**ಪ್ರ:** 1980ರ ನಂತರವೂ ಹರಿಜನರಿಗೆ ಮೀಸಲಾತಿ ಮತ್ತು ಸವಲತ್ತುಗಳನ್ನು ಮುಂದುವರೆಸಬೇಕೆಂದು ಇಚ್ಛಿಸುತ್ತೀರಾ ?

**ರಾಂ:** ಹೌದು, ಮೀಸಲಾತಿ ಬಗ್ಗೆ ಅಪಾರವಾಗಿ ಕೆಟ್ಟ ಪ್ರಚಾರ ಮಾಡಲಾಗಿದೆ. ಇದರಿಂದ ಆಡಳಿತರಂಗ ಕಾರ್ಯಾಧ್ಯಕ್ಷತೆ ಕಡಿಮೆಯಾಗಿದೆ ಎಂದು ಜನರು ಹೇಳುತ್ತಿದ್ದಾರೆ. ಯಾಕೆ ಎಂಜಿನಿಯರಿಂಗ್ ಬಗ್ಗೆ ಅರ್ಹತೆ ಪಡೆಯದ ಹರಿಜನ ವ್ಯಕ್ತಿಯನ್ನು ಎಂಜಿನಿಯರ್ ಹುದ್ದೆಗೆ ನೇಮಿಸಿಕೊಳ್ಳುತ್ತಾರೆಯೆ ? ಅರ್ಹ ವೈದ್ಯಕೀಯ ಪದವಿಯನ್ನು ಪಡೆಯದ ಹರಿಜನರನ್ನು ಡಾಕ್ಟರ್ ಹುದ್ದೆಗೆ ನೇಮಿಸಿಕೊಳ್ಳುತ್ತಾರೆಯೆ ?

**ಪ್ರ:** ಆದರೆ ಶಾಸಕಾಂಗ, ನ್ಯಾಯಾಂಗ, ಅಧಿಕಾರಿ ವರ್ಗ ಮತ್ತು ಸಾರ್ವಜನಿಕ ಉದ್ಯಮಗಳ ಕಾರ್ಯಾಧಕ್ಷತೆ ಮೀಸಲಾತಿಯಿಂದಾಗಿ ಕೆಳ ಮಟ್ಟಕ್ಕಿಳಿದಿದೆ. ಉದಾ. ಒಂದು ಹುದ್ದೆ ಮೀಸಲಾತಿಗೆ ಒಳಪಟ್ಟಿದ್ದರೆ, ಹೆಚ್ಚು ಅಂಕ ಪಡೆದ ಒಬ್ಬ ಮೇಲ್ಜಾತಿ ಎಂಜಿನಿಯರ್ ಪದವೀಧರನಿದ್ದಾಗ್ಯೂ ಸಹಅವನಿಗೆಕೆಲಸ ಸಿಕ್ಕುವುದಿಲ್ಲ. ಅದೇ ಮೇಲ್ಜಾತಿ ಅಭ್ಯರ್ಥಿಯಷ್ಟು ಅರ್ಹತೆ ಇಲ್ಲದಾಗ್ಯೂ ಸಹ ಹರಿಜನ ಅಭ್ಯರ್ಥಿಗೆ ಆ ಹುದ್ದೆ ಸಿಕ್ಕುತ್ತದೆ; ಏಕೆಂದರೆ ಅದು ಮೀಸಲಾತಿಗೆ ಒಳಪಟ್ಟಿರುವುದರಿಂದ ಇದು ನಿಜ ತಾನೆ ?

**ರಾಂ:** ಆದರೆ ಮೀಸಲಾತಿ ಪದ್ಧತಿ ಜಾರಿಗೆ ಬರುವುದಕ್ಕೆ ಮುನ್ನ ಏನು ಪರಿಸ್ಥಿತಿ ಬಹಳ ಚೆನ್ನಾಗಿತ್ತೆಂತು ನನಗೆ ಹೇಳುತ್ತಿದ್ದೀರೊ ?

**ಪ್ರ:** ಅಂತು ಎಂ. ಪಿ. ಗಳ ಸಾಮರ್ಥ್ಯ ಕೆಲವು ವರ್ಷಗಳ ಹಿಂದೆ ಇದ್ದಷ್ಟು ಈಗ ಇಲ್ಲವೆಂದು ತಾವು ಒಪ್ಪಿಕೊಳ್ಳುತ್ತೀರಿ ತಾನೆ. ಶೇ. 50 ರಷ್ಟು ಎಂ. ಪಿ. ಗಳು ಚರ್ಚೆಗಳಲ್ಲಿ ಭಾಗವಹಿಸುತ್ತಿಲ್ಲ; ಅವರಲ್ಲಿ ಬಹಳಷ್ಟು ಜನ ಅವಿದ್ಯಾವಂತರು ಗೊತ್ತೆ ?

**ರಾಂ:** ಹರಿಜನರಿಗೆ ಇಟ್ಟಿರುವ ಮೀಸಲು ಸ್ಥಾನಕ್ಕೂ ಎಂ. ಪಿ. ಗಳ ಅನಕ್ಷರತೆಗೂ ಏನು ಸಂಬಂಧ ? ಅನಕ್ಷರಸ್ಥ ಬ್ರಾಹ್ಮಣರು ಪಾರ್ಲಿಮೆಂಟಿನಲ್ಲಿ ಕೂತಿದ್ದರೆ ಅದಕ್ಕೆ ಹರಿಜನರಿಗೆ ಇಟ್ಟಿರುವ ಮೀಸಲು ಸಾನೆಗಳು ಕಾರಣವೆ ? ಅಲ್ಲದೆ ಅನಕ್ಷರಸ್ಥರಾದರೂ ಅವರು ಜನತೆಯ ಪ್ರತಿನಿಧಿಗಳು ತಾನೆ. ಇದರಲ್ಲಿ ತಪ್ಪೇನಿದೆ ?

**ಪ್ರ:** ಏನು ಎಲ್ಲಾ ಹರಿಜನರೂ ನಿಮಗೇ 'ಓಟು ಮಾಡುತ್ತಾರೆ ಎಂದುಕೊಂಡಿದ್ದೀರಾ ?

**ರಾಂ:** ಯಾರೇ ಆದರೂ ತಮ್ಮ ಜಾತಿಯ ಎಲ್ಲಾ ಓಟುಗಳನ್ನು ಸಂಪೂರ್ಣವಾಗಿ ಪಡೆಯಲಾರರು.

(ದೌಜನ್ಯ "ಇಂಡಿಯಾ ಟುಡೇ")

# ಜಮೀನು ವಿವಾದ–ಹಲ್ಲೆ

3-9-79 ರಂದು ತಾವೇ ಆ ಜಮೀನನ್ನು ಉತ್ತು ಹುರುಳಿ ಚೆಲ್ಲಿದ್ದಾರೆ.

ಈ ಹಿನ್ನೆಲೆಯಲ್ಲಿ ಹರಿಜನರನ್ನು ಕಂಡರೆ ಕುದಿಯುತ್ತಿದ್ದ ಸವರ್ಣೀಯರು 9-9-79 ರಂದು ಸಂಜೆ ನಾರಾಯಣದಾಸ್‌ರನ್ನು ಅವರು ಬರುವ ದಾರಿ ಕಾದು ದೊಣ್ಣೆ ಸೈಕಲ್ ಚೈನುಗಳಿಂದ ಹೊಡೆದು ಅವರು ಪ್ರಜ್ಞಾಹೀನರಾದ ನಂತರ ಓಡಿ ಹೋದರೆಂದು ತಿಳಿದುಬಂದಿದೆ. ಈ ಸಂಬಂಧದಲ್ಲಿ ಪೋಲೀಸರಿಗೆ ದೂರು ನೀಡಲಾಗಿದ್ದು ಹಲ್ಲೆಗೊಳಗಾಗಿರುವ ನಾರಾಯಣದಾಸ್‌ರವರನ್ನು ಕೋಲಾರದ ಎಸ್. ಎನ್. ಆರ್. ಆಸ್ಪತ್ರೆಗೆ ಸೇರಿಸಲಾಯಿತು.

ಇದುವರೆಗೂ ಪೋಲೀಸರು ಯಾರನ್ನೂ ಬಂಧಿಸಿಲ್ಲ. ಅಲ್ಲಿ ಹರಿಜನ ಕುಟುಂಬ ಇವರೊಬ್ಬರದೇ ಆಗಿದ್ದು ಮತ್ತೆಲ್ಲ ಸವರ್ಣೀಯರಾಗಿರುವುದರಿಂದ ವಾಸಮಾಡಲು ಹೆದರುತ್ತಿರುವ ಹರಿಜನ ಕುಟುಂಬಕ್ಕೆ ರಕ್ಷಣೆಕೊಡಬೇಕೆಂದೂ, ಹಲ್ಲೆಕೋರರನ್ನು ಇದುವರೆಗೆ ಯಾರನ್ನು ಬಂಧಿಸಿಲ್ಲದಿರುವುದನ್ನು ಖಂಡಿಸಿ ತಕ್ಷಣ ಅಪರಾಧಿಗಳನ್ನು ಬಂಧಿಸಬೇಕೆಂದೂ ಜಿಲ್ಲಾ ಸಂಘರ್ಷ ಸಮಿತಿ ಒತ್ತಾಯಿಸಿದೆ.

---

# ಹಿರಿಯ ದಲಿತ ಸಾಹಿತಿ ಜಿ. ವೆಂಕಟಯ್ಯ ಇನ್ನಿಲ್ಲ

ಹಿರಿಯ ದಲಿತ ಸಾಹಿತಿ ಜಿ. ವೆಂಕಟಯ್ಯ ಇನ್ನಿಲ್ಲ. ಅರವತ್ತೆಂಟು ವಯಸ್ಸಿನ ಅವರು ಸೆಪ್ಟೆಂಬರ್ 22 ರಂದು ಮೈಸೂರಿನ ತಮ್ಮ ನಿವಾಸದಲ್ಲಿ ನಿಧನರಾದರು. "ಜಾತಿ ಬಡತನ ಎಲ್ಲದರ ಜೊತೆಗೆ ಆಸ್ತಮ ನನ್ನ ಜೀವವನ್ನು ಹಿಂಡುತ್ತಿದೆ" ಎಂದು ಈ ಎರಡು ವರ್ಷಗಳ ಹಿಂದೆ ಪಂಚಮಕ್ಕೆ ನೀಡಿದ ಸಂದರ್ಶನದಲ್ಲಿ ತಮ್ಮ ನೋವನ್ನು ತೋಡಿಕೊಂಡಿದ್ದರು. ಆದರೆ ಆ ಆಸ್ತಮ ಅವರನ್ನು ಕೊನೆಗೂ ಬಿಡಲಿಲ್ಲ.

ಎಲೆಮರೆಕಾಯಿಯಾಗಿದ್ದುಕೊಂಡೇ ಸಾಹಿತ್ಯ ಕ್ಷೇತ್ರದಲ್ಲಿ ದುಡಿದ ವೆಂಕಟಯ್ಯನವರು ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕಿನ ಹೆಮ್ಮನಹಳ್ಳಿಯ ಬಡಕುಟುಂಬದಲ್ಲಿ 1916ರ ಏಪ್ರಿಲ್ 10 ರಂದು ಜನಿಸಿದ್ದರು.

ಬಡತನದಿಂದ ಹೊರಬರಲಾರದೆ ಇವರು ಓದಿದ್ದು ಇಂಟರ್ ಮಿಡಿಯಟ್. ಸರ್ಕಾರದಲ್ಲಿ ನೌಕರಿಗಿದ್ದ ಇವರು ಎಲ್ಲರ ನೋವುಗಳು ತಮ್ಮದೇ ಎಂದು ಸಾಹಿತ್ಯ ರಚನೆಯಲ್ಲಿ ಕೈಯಾಡಿಸಿದ್ದರು.

"ದಲಿತರು ತೀವ್ರವಾಗಿ ಬರೆಯಬೇಕು. ನಮಗೂ ಭಾವನೆಗಳಿವೆ ಎಂಬುದನ್ನು ತೋರಿಸಬೇಕು. ಎಷ್ಟು ಒರಟಾಗಿ ನೇರವಾಗಿ ಬರೆದರೂ ಅದಕ್ಕೆ ಸಾಹಿತ್ಯದ ಕಲೆ ಇರಬೇಕು" ಎಂದು ಅವರು ಪಂಚಮಕ್ಕೆ ತಿಳಿಸಿದ್ದರು.

ತೀರಾ ಸರಳ ಜೀವಿಯಾಗಿದ್ದ ವೆಂಕಟಯ್ಯ ಅವರು "ನಮ್ಮ ಜನರಲ್ಲಿ ಪ್ರತಿಭೆ ಇದೆ. ಆದಕ್ಕೆ ಪುರಸ್ಕಾರ ಇಲ್ಲ, ಎಂದು ಅಸಹಾಯಕತೆಯನ್ನು ವ್ಯಕ್ತಪಡಿಸಿದರೂ ಅದರ ಬೆನ್ನಲ್ಲೇ ಎಲ್ಲವನ್ನೂ ಮಾಡಬೇಕು" ಎಂಬ ಆಸೆಯನ್ನು ಹೊತ್ತಿದ್ದರು. ಕೆಲಕಾಲ ಸಾಹಿತ್ಯ ಅಕಾಡೆಮಿ ಸದಸ್ಯರೂ ಆಗಿದ್ದ ವೆಂಕಟಯ್ಯ ಅವರು ಅಕಾಡೆಮಿ ಪ್ರಶಸ್ತಿ ವಿಜೇತರೂ ಆಗಿದ್ದರು. ಹೊಸದಾಗಿ ಅಕ್ಷರ ಕಲಿತ ವಯಸ್ಕರಿಗಾಗಿ ಅವರು ಬರೆದಿದ್ದ ಸಾಹಿತ್ಯಕ್ಕೆ ರಾಷ್ಟ್ರಪತಿಗಳಿಂದ ಪ್ರಶಸ್ತಿಯೂ ಬಂದಿತ್ತು.

---

KRNB 364 Panchama Fortnightly 5, Ooctober 79 Regd. No. 29681/76

# ಕರ್ನಾಟಕ ರಾಜ್ಯದಲ್ಲಿ ಪೌಷ್ಠಿಕ ಆಹಾರ ಕಾರ್ಯಕ್ರಮ

## ಸುಮಾರು 27 ಲಕ್ಷ ಮಕ್ಕಳಿಗೆ ಪ್ರಯೋಜನ

ಶಾಲಾ ಮಕ್ಕಳಿಗೆ ಉಪಯುಕ್ತವಾದ ಮಧ್ಯಾಹ್ನದ ಉಪಾಹಾರ ಮತ್ತು ವಿಶೇಷ ಪೌಷ್ಠಿಕ ಆಹಾರ ಕಾರ್ಯಕ್ರಮದನ್ವಯ ೧೯೮೨-೮೩ರ ಹೊತ್ತಿಗೆ ೨೭.೦೭ ಲಕ್ಷ ಮಕ್ಕಳು ಪ್ರಯೋಜನ ಪಡೆಯಲಿದ್ದಾರೆ. ಪ್ರಸಕ್ತ ವರ್ಷದಲ್ಲಿ ಈ ಕಾರ್ಯಕ್ರಮದ ಪ್ರಯೋಜನವನ್ನು ೨೧.೬೫ ಲಕ್ಷ ಮಕ್ಕಳು ಪಡೆಯಲಿದ್ದಾರೆ. ಈ ಉದ್ದೇಶಕ್ಕಾಗಿ ೧೯೭೮-೮೩ರ ಯೋಜನೆಯಲ್ಲಿ ೨,೩೫೦ ಲಕ್ಷ ರೂಪಾಯಿಗಳನ್ನು ಒದಗಿಸಲು ಉದ್ದೇಶಿಸಲಾಗಿದೆ. ಮಧ್ಯಾಹ್ನದ ಉಪಾಹಾರ ಕಾರ್ಯಕ್ರಮದನ್ವಯ ೬-೧೩ ವರ್ಷ ವಯಸ್ಸಿನ ೧೫.೬೦ ಲಕ್ಷ ಶಾಲಾ ಮಕ್ಕಳು ಮತ್ತು ವಿಶೇಷ ಪೂರಕ ಪೌಷ್ಠಿಕ ಆಹಾರ ಕಾರ್ಯಕ್ರಮದ ಕೆಳಗೆ ೦-೬ ವರ್ಷ ವಯಸ್ಸಿನ ಮಕ್ಕಳು, ಗರ್ಭಿಣಿಯರು ಮತ್ತು ಬಾಣಂತಿಯರನ್ನು ಒಳಗೊಂಡಂತೆ ೧೧.೪೭ ಲಕ್ಷ ಜನ ಪ್ರಯೋಜನ ಪಡೆಯುತ್ತಾರೆ. ಅವರಲ್ಲಿ ಹೆಚ್ಚಿನವರು ಹರಿಜನರು-ಗಿರಿಜನರಾಗಿದ್ದಾರೆ.

**ಕರ್ನಾಟಕ ಬಡವರ ಏಳಿಗೆಗಾಗಿ,**
**ನಿರಂತರಯತ್ನ ನಡೆಯುತ್ತಿರುವ ರಾಜ್ಯ.**

ಕರ್ನಾಟಕ ಸರ್ಕಾರದ
ವಾರ್ತಾ ಮತ್ತು ಪ್ರಚಾರ ಇಲಾಖೆಯ ಪ್ರಕಟಣೆ

No. DIP/CPB/22/9/79-80

ಈ ಪತ್ರಿಕೆಯು ರಾಮದೇವ ರಾಕೆ ಅವರ ಸಂಪಾದಕತ್ವದಲ್ಲಿ, ನೂತನ್ ಪ್ರಿಂಟಿಂಗ್ ಪ್ರೆಸ್, ಬೆಂಗಳೂರು-3 ಇಲ್ಲಿ ಮುದ್ರಿಸಲ್ಪಟ್ಟು ಗೋವಿಂದಯ್ಯ ಅವರಿಂದ ಪ್ರಕಟಿಸಲ್ಪಟ್ಟಿತು. ವಿಳಾಸ: 5ಎ ವಾಣಿ ವಾಣಿಜ್ಯಶಾಲಾ, ಪತ್ರಕರ್ತರ ಕಾಲೋನಿ. ಬೆಂಗಳೂರು-560002.